# ಕರ್ನಾಟಕ ವಿಧಾನ ಪರಿಷತ್ತು

1). ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1429 + 1437

2). ಸದಸ್ಯರ ಹೆಸರು : ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) ಹಾಗೂ ಶ್ರೀಮತಿ ಎಸ್.ವೀಣಾ ಅಚ್ಚಯ್ಯ(ವಿಧಾನ ಸಭೆಯಿಂದ ಚುನಾಯಿತರಾದವರು)

3). ಉತ್ತರಿಸುವ ದಿನಾಂಕ : 19.03.2020

4). ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ಶಾಸಕರುಗಳಿಗೆ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಪ್ರತಿ ವರ್ಷ ನೀಡುತ್ತಿರುವ ಅನುದಾನ ಎಷ್ಟು: (ವಿಧಾನ ಪರಿಷತ್/ವಿಧಾನಸಭಾ ಸದಸ್ಯರಿಗೆ) | ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಪ್ರತಿ ವರ್ಷ ಮಾನ್ಯ ವಿಧಾನಪರಿಷತ್/ವಿಧಾನಸಭಾ ಸದಸ್ಯರಿಗೆ ನೀಡುತ್ತಿರುವ ಅನುದಾನ ತಲಾ ರೂ.2.00 ಕೋಟಿಗಳು ಇರುತ್ತದೆ. |
| (ಆ) | 2018-19ನೇ ಆರ್ಥಿಕ ವರ್ಷದಲ್ಲಿ ಪ್ರತಿಯೊಬ್ಬ ಮಾನ್ಯ ಸದಸ್ಯರಿಗೆ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ನಿಧಿಯಿಂದ ನಿಗಧಿಯಾಗಿರುವಷ್ಟು ಅನುದಾನ ಬಿಡುಗಡೆಯಾಗಿದೆಯೇ: | 2018-19ನೇ ಸಾಲಿನಲ್ಲಿ ಒಟ್ಟಾರೆ ರೂ.481.69 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.<br>ಜಿಲ್ಲಾಧಿಕಾರಿಗಳ ಉಳಿತಾಯ ಖಾತೆಯಲ್ಲಿ ಫೆಬ್ರವರಿ-2019ರ ಅಂತ್ಯಕ್ಕೆ ಹೆಚ್ಚಿನ ಉಳಿಕೆ ಹಣ ರೂ.830.67 ಕೋಟಿಗಳು ಇದ್ದುದರಿಂದ, 2018-19ನೇ ಸಾಲಿನ ನಾಲ್ಕನೆ ಕಂತಿನ ಅನುದಾನವು ಬಂಡವಾಳ ವೆಚ್ಚದಡಿ ಬಿಡುಗಡೆಯಾಗಿರುವುದಿಲ್ಲ. |
| (ಇ) | 2019-20ನೇ ಸಾಲಿನಲ್ಲಿ ಮಾರ್ಚ್ ಅಂತ್ಯವಾದರೂ ಸದರಿ ನಿಧಿಯಿಂದ ಪ್ರತಿಯೊಬ್ಬ ಸದಸ್ಯರಿಗೆ ಬಿಡುಗಡೆಯಾಗಿರುವ ಅನುದಾನವೆಷ್ಟು: ಹಾಗೂ ಪೂರ್ಣ ಪ್ರಮಾಣದ ಅನುದಾನ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | 2019-20ನೇ ಸಾಲಿನಲ್ಲಿ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಈವರೆಗೂ 2 ಕಂತುಗಳಲ್ಲಿ ಒಟ್ಟು ರೂ.299.67 ಕೋಟಿಗಳ ಅನುದಾನವನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ. ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಲ್ಲಿ ಕಾಮಗಾರಿಗಳ ಅನುಷ್ಠಾನಕ್ಕೆ ಪೂರ್ಣ ಪ್ರಮಾಣದ ಅನುದಾನ ಇರುವುದರಿಂದ ಬಿಡುಗಡೆಗೊಳಿಸಿರುವುದಿಲ್ಲ. |
| (ಈ) | ಬಂದಿದ್ದಲ್ಲಿ, ಬಿಡುಗಡೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು: ಅನುದಾನ ಬಿಡುಗಡೆಯಾಗದಿದ್ದಲ್ಲಿ ಕಾರಣಗಳೇನು: ಈ | ದಿನಾಂಕ:01.04.2019 ರಂದು ರಾಜ್ಯದ ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಲ್ಲಿ ರೂ.948.97 ಕೋಟಿಗಳಿದ್ದು, ಪ್ರತಿ ಶಾಸಕರುಗಳಿಗೆ ಪ್ರತಿ ವರ್ಷಕ್ಕೆ |

| | | |
|---|---|---|
| | ಕುರಿತು ಸರ್ಕಾರ ತೆಗೆದುಕೊಳ್ಳಲಿರುವ ಕ್ರಮಗಳೇನು: | ರೂ.2.00 ಕೋಟಿಗಳ ಕ್ರಿಯಾ ಯೋಜನೆಯನ್ನು ಅನುಮೋದಿಸಿ ಅನುಷ್ಠಾನಗೊಳಿಸಲು ಆದೇಶಿಸಿದ್ದು, ಪಿ.ಡಿ.ಖಾತೆಯಲ್ಲಿ ಅನುದಾನವಿರುವುದರಿಂದ ಸರ್ಕಾರದಿಂದ ಬಿಡುಗಡೆಯಾಗುವ ಅನುದಾನಕ್ಕೆ ಕಾಯದೆ ರೂ.2.00 ಕೋಟಿಗಳ ಮಿತಿಗೊಳಪಟ್ಟು ಕ್ರಿಯಾ ಯೋಜನೆಯನ್ನು ಅನುಮೋದಿಸಿ ವೆಚ್ಚ ಭರಿಸುವಂತೆ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿರುತ್ತದೆ. |
| (ಉ) | ಸದರಿ ಯೋಜನೆಯಡಿ ನೀಡುತ್ತಿರುವ ವಾರ್ಷಿಕ ಅನುದಾನವನ್ನು ಹೆಚ್ಚಿಸಲು ಸರ್ಕಾರ ಕೈಗೊಂಡ ಕ್ರಮಗಳೇನು: | ಸರ್ಕಾರದ ಹಂತದಲ್ಲಿ ಅನುದಾನವನ್ನು ಹೆಚ್ಚಿಸಲು ಪ್ರಸ್ತಾವನೆ ಇರುವುದಿಲ್ಲ. |
| (ಊ) | ವಿಧಾನ ಪರಿಷತ್ ಸದಸ್ಯರುಗಳು ಹೆಚ್ಚಿನ ತಾಲ್ಲೂಕು ಮತ್ತು ಜಿಲ್ಲೆಗಳನ್ನು ಪ್ರತಿನಿಧಿಸುತ್ತಿರುವುದರಿಂದ ಇವರಿಗೆ ಅನುದಾನವನ್ನು ಹೆಚ್ಚಿಸಲು ಸರ್ಕಾರ ಕ್ರಮವಹಿಸಬಾರದೇಕೆ? | ಈಗಾಗಲೇ ಪ್ರತಿ ವರ್ಷ ವಿಧಾನಸಭಾ/ವಿಧಾನಪರಿಷತ್ತು ಸದಸ್ಯರಿಗೆ ತಲಾ ರೂ.2.00 ಕೋಟಿಗಳ ಅನುದಾನ ನಿಗದಿಪಡಿಸಲಾಗಿದೆ. ಅನುದಾನ ಹೆಚ್ಚಿಸುವ ಬಗ್ಗೆ ಸರ್ಕಾರದ ಹಂತದಲ್ಲಿ ಪ್ರಸ್ತಾವನೆ ಇರುವುದಿಲ್ಲ. |

ಸಂಖ್ಯೆ: ಪಿಡಿಎಸ್ 26 ಕೆಎಲ್ಎಸ್ 2020

(ಬಿ.ಎಸ್.ಯಡಿಯೂರಪ್ಪ),
ಮುಖ್ಯಮಂತ್ರಿ